# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

೩ನೇ ವರ್ಷ ೩ನೇ ಸಂಚಿಕೆ ಕೊಪ್ಪ ೯-೯-೧೯೮೯ ಭಾನುವಾರ ಬೆಲೆ ೨೦ ಪೈಸೆ


## ಕೊಪ್ಪದಲ್ಲಿ ಕೋರ್ಟ್ ಇನ್ನಾದರೂ ತೆರೆಯಲಿ

ಸೆಪ್ಟೆಂಬರ್ ೧೧ ರ ಸೋಮವಾರ ಚಿಕ್ಕಮಗಳೂರಿನ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರಾದ ಶ್ರೀ ಎಸ್.ಬಿ.ತಂಬದ್‌ರವರು, ಕೊಪ್ಪದಲ್ಲಿ ಪ್ರಥಮ ದರ್ಜೆ ನ್ಯಾಯಾಲಯದ ಸ್ಥಾಪನೆಗೆ ಉದ್ದೇಶಿಸಿರುವ ಕಟ್ಟಡದ ಪರಿಶೀಲನೆಗಾಗಿ ಬರುವವರಿದ್ದಾರೆ. ಈ ಸಂದರ್ಭದಲ್ಲಿ ಊರಿನ ನಾಗರಿಕರ ಪರವಾಗಿ ಪುರಸಭೆ ಅವರಿಗೆ ಬಿನ್ನವತ್ತಳೆ ಅರ್ಪಿಸಿ ಅತ್ಯಂತ ಶೀಘ್ರವಾಗಿ ಕೋರ್ಟು ಸ್ಥಾಪಿಸುವಂತೆ ಮನವಿ ಮಾಡಲಿದೆ. ಅಲ್ಲದೆ ತಾಲ್ಲೂಕಿನ ದೂರ ದೂರದ ಗ್ರಾಮಗಳ ಜನತೆಯ ಪ್ರತಿನಿಧಿಗಳ ಒಂದು ನಿಯೋಗವೂ ನ್ಯಾಯಾಧೀಶರಿಗೆ ಇದೇ ರೀತಿ ಮನವಿ ಅರ್ಪಿಸುವ ಸಂಭವವಿದೆ.

ಅಂತೂ ಕೊಪ್ಪದಲ್ಲೊಂದು ನ್ಯಾಯಾಲಯದ ಸ್ಥಾಪನೆ ಸನ್ನಿಹಿತವಾದಂತೆ ಕಾಣುತ್ತದೆ. ವಾಸ್ತವವಾಗಿ ಈಗ್ಗೆ ಕನಿಷ್ಠ ೧೦ ವರ್ಷಗಳ ಹಿಂದೆಯೇ ಆಗಿರಬೇಕಾಗಿದ್ದ ಕೆಲಸ ಇದು. ಮಂಜೂರಾಗಿ, ಕಟ್ಟಡ ಕಟ್ಟಲ್ಪಟ್ಟು ಎಲ್ಲಾ ಸಿದ್ಧತೆ ಆಗುವಾಗ, ಇಲ್ಲಿ ಕೋರ್ಟು ಸ್ಥಾಪಿಸಿದರೆ ನ. ರಾ. ಪುರದ ಹಿತಾಸಕ್ತಿಗೆ ಧಕ್ಕೆಯಾಗುತ್ತದೆಂದು ಅಲ್ಲಿನವರು ಅಡ್ಡಿ ತಂದಿದ್ದರಿಂದ ನ್ಯಾಯಾಲಯ ಈ ತಾಲ್ಲೂಕಿನ ಜನರಿಗೆ ಇನ್ನೂ ಮರೀಚಿಕೆಯಾಗಿಯೇ ಉಳಿದಿದೆ.

ನಾವು ಈ ಹಿಂದೆಯೇ ಬರೆದಿರುವಂತೆ, ತೀರಾ ದುರ್ಗಮವಾದ, ಸಂಚಾರ ಸೌಕರ್ಯಗಳು ತೀರಾ ಅಲಭ್ಯವಾದ ಈ ತಾಲ್ಲೂಕಿನ ದೂರ ದೂರದ ಜನರಿಗೆ ಇಲ್ಲೊಂದು ನ್ಯಾಯಾಲಯದ ಸ್ಥಾಪನೆಯಿಂದ ದೊರೆಯುವ ಪ್ರಯೋಜನ ಎಷ್ಟೆಂಬುದು ಅಳತೆಗೆ ಮೀರಿದ್ದು. ಹಾಗಾಗಿಯೇ, ಪಕ್ಷಗಳ ಭೇದವಿಲ್ಲದೆ ಇಡೀ ತಾಲ್ಲೂಕಿನ ಎಲ್ಲ ಮುಖಂಡರೂ ಜನರೂ ಒಂದಾಗಿ ಈ ಬೇಡಿಕೆಗಾಗಿ —ಸೌಮ್ಯವಾಗಿಯೇ ಆದರೂ ಸತತವಾಗಿ— ಹೋರಾಡುತ್ತಿದ್ದಾರೆ.

ಅಲ್ಲದೆ, ಶೃಂಗೇರಿಯಲ್ಲಿ ಕಟ್ಟಡದ ಸೌಕರ್ಯವಿಲ್ಲದ್ದರಿಂದ ಅಲ್ಲಿ ಸದ್ಯಕ್ಕೆ ನ್ಯಾಯಾಲಯ ಸ್ಥಾಪನೆ ಆಗುವ ನಿರೀಕ್ಷೆ ಇಲ್ಲವೆನ್ನಲಾಗಿದ್ದು, ಆ ತಾ॥ನ ಜನ ಕೂಡ ಕೊಪ್ಪದಲ್ಲಿ ನ್ಯಾಯಾಲಯ ಸ್ಥಾಪನೆಗೆ ಬೆಂಬಲವಾಗಿದ್ದಾರೆಂದು ಹೇಳಲಾಗಿದೆ. ಹೀಗಿರುವಾಗ, ಎರಡು ತಾ॥ಗಳಿಗೆ ಪ್ರಯೋಜನವಾಗುವ ಈ ಕೆಲಸಕ್ಕೆ ಯಾರು ಯಾವ ಕಾರಣಕ್ಕೇ ಅಡ್ಡ ಬಂದರೂ ಅದು ಅಸಮರ್ಥನೀಯ.

ವಾಸ್ತವವಾಗಿ, ಈ ಅಡ್ಡಿಗೆ ಪ್ರಮುಖ ಕಾರಣಕರ್ತರಾಗಿದ್ದ ನ.ರಾ.ಪುರದ ವಕೀಲರುಗಳಲ್ಲೂ ಪುನರಾಲೋಚನೆ, ಮನಃಪರಿವರ್ತನೆ ನಡೆದಿದೆಯೆಂದು ಹೇಳಲಾಗಿದೆ. ನೆರೆಯ ಇನ್ನೊಂದು ತಾಲ್ಲೂಕಿನಲ್ಲಿ ಕೋರ್ಟು ಆಗುವುದು ಬೇಡ ಎನ್ನಲು ನಮಗೇನು ಹಕ್ಕಿದೆ? ಎಂದು ಅವರಲ್ಲೇ ಕೆಲವರು ಯೋಚಿಸತೊಡಗಿದ್ದಾರೆನ್ನಲಾಗಿದೆ. ಇಂಥ ಆತ್ಮವಿಮರ್ಶೆ ಬಹಳ ಉಪಯುಕ್ತ ಮತ್ತು ಅಭಿನಂದನೀಯ.

ಅಚ್ಚುಕಟ್ಟಾದ ಕಟ್ಟಡ ಸಿದ್ಧವಾಗಿದೆ; ನ್ಯಾಯಾಧೀಶರ ವಸತಿಗೂ ವ್ಯವಸ್ಥೆ ಆಗಿದೆ. ಜನ ನ್ಯಾಯಾಲಯದ ಪ್ರಯೋಜನ ಸಿಕ್ಕೀತೆಂದು ವರ್ಷಗಟ್ಟಲೆಯಿಂದ ಕಾಯುತ್ತಿದ್ದಾರೆ. ಸರ್ಕಾರದ ಕಡೆಯಿಂದಲೂ ಯಾವ ತಡೆಯೂ ಇಲ್ಲ. ಶ್ರೀ ತಂಬದ್‌ರವರೂ ಕೂಡ ಇಲ್ಲಿನ ಜನರ ಸಂಕಷ್ಟವನ್ನು ಅರ್ಥ ಮಾಡಿಕೊಂಡಿರುವ ಸಹೃದಯರೆಂದು ಕೇಳಿದ್ದೇವೆ. ಹೀಗಿರುವಾಗ ಇನ್ನಾದರೂ ನ್ಯಾಯಾಲಯದ ಸ್ಥಾಪನೆ ಶೀಘ್ರವಾಗಿ ಆಗಬೇಕು. "ನ್ಯಾಯದಾನ ವಿಳಂಬ ಮಾಡಿದರೆ ನ್ಯಾಯವನ್ನೇ ನಿರಾಕರಿಸಿದಂತೆ" ಎಂಬುದು ನ್ಯಾಯಕ್ಕೆ ಸಂಬಂಧಿಸಿದ ಮಾತು. ಅದನ್ನೇ ನ್ಯಾಯಾಲಯಕ್ಕೂ ಅನ್ವಯಿಸುವಂತಾಗಬಾರದು.

—ಸಂಪಾದಕ.

## [ಕೊ]ಪ್ಪ ತಾ॥ ನಲ್ಲಿ ಖಾಯಂ ಸಹಾಯಕ ವಿದ್ಯಾಧಿಕಾರಿಗಳಿಲ್ಲದೆ [ಶಿ]ಕ್ಷಕರಿಗೆ ೬ ತಿಂಗಳಿಗೊಮ್ಮೆ 'ಉಪವಾಸ'

**ಕೊಪ್ಪ: ಈ ತಾಲ್ಲೂಕಿನಲ್ಲಿ ಖಾಯಂ ಸಹಾಯಕ ವಿದ್ಯಾಧಿಕಾರಿಗಳಿಲ್ಲದ[ಿರು]ವಾಗಿ ತಾಲ್ಲೂಕಿನ ಶಿಕ್ಷಕರಿಗೆ ಪ್ರತಿ ೬ ತಿಂಗಳಿಗೊಮ್ಮೆ ಉಪವಾಸ ಬೀಳುವ [ಪ]ರಿಸ್ಥಿತಿ ಈಗ್ಗೆ ೨-೩ ವರ್ಷದಿಂದಲೂ ನಡೆದುಕೊಂಡು ಬಂದಿದೆ.**

ಖಾಯಂ ಅಲ್ಲದ ಸಹಾಯಕ ವಿದ್ಯಾಧಿ[ಕಾ]ರಿಗಳು ಶಿಕ್ಷಕರ ಸಂಬಳದ ಹಣವನ್ನು [ಬಟವಾಡೆ] ಮಾಡುವ ಪರವಾನಗಿ ಪ್ರತಿ ೬ ತಿಂಗ[ಳಿಗೊ]ಮ್ಮೆ ಸರ್ಕಾರದಿಂದ ಮಂಜೂರಾಗಿ ಬರಬೇಕು. ಈ ಹಂತದಲ್ಲಿ ವಿಪರೀತ ವಿಳಂಬವಾಗುವುದರಿಂದ ಕೆಲವೊಮ್ಮೆ ೩ ತಿಂಗಳ ಕಾಲ ಸಂಬಳ ಇಲ್ಲವಾಗುವ ಪರಿಸ್ಥಿತಿ ಉದ್ಭವಿಸುತ್ತಿದೆಯೆನ್ನಲಾಗಿದೆ.

ಈ ಪರಿಸ್ಥಿತಿಯನ್ನು ನಿವಾರಿಸುವಂತೆ ಶಿಕ್ಷಕರುಗಳು ಬೇಕಾದಷ್ಟು ಮನವಿ ಮಾಡಿದ್ದರೂ ಅವರ ಸಹಾಯಕ್ಕೆ ಬರುವವರಿಲ್ಲವಾಗಿದ್ದು, ಇನ್ನು ೧೫ ದಿನದೊಳಗೆ ಸಂಬಳ ಬಟವಾಡೆಯಾಗದಿದ್ದಲ್ಲಿ ಮುಷ್ಕರ ಹೂಡುವುದಾಗಿ ಸರ್ಕಾರದ ಮುಖ್ಯ ಕಾರ್ಯದರ್ಶಿ ಹಾಗೂ ತಾ॥ ಮ್ಯಾಜಿಸ್ಟ್ರೇಟರಿಗೆ ಶಿಕ್ಷಕರ ಸಂಘ ಸಲ್ಲಿಸಿರುವ ಮನವಿಯಲ್ಲಿ ತಿಳಿಸಿದೆ.

## ಜಿಲ್ಲಾ ಗ್ರಾಮೀಣ ಬ್ಯಾಂಕಿನಿಂದ ಜಿಲ್ಲೆಯಲ್ಲಿ ಈ ವರ್ಷ ೧೦ ಶಾಖೆಗಳು

ಚಿಕ್ಕಮಗಳೂರು: ಈ ವರ್ಷ ಹೊಸದಾಗಿ ಆರಂಭವಾಗಿರುವ ಚಿಕ್ಕಮಗಳೂರು-ಕೊಡಗು ಗ್ರಾಮೀಣ ಬ್ಯಾಂಕ್ ತನ್ನ ಶಾಖೆಗಳ ಜಾಲದ ಮೊದಲ ಹಂತವಾಗಿ ಈ ವರ್ಷ ಜಿಲ್ಲೆಯಲ್ಲಿ ೧೦ ಮತ್ತು ಕೊಡಗು ಜಿಲ್ಲೆಯಲ್ಲಿ ೧೧ ಶಾಖೆಗಳನ್ನು ತೆರೆಯಲಿದೆ.

ಇದರ ಪ್ರಯೋಜನ ಪಡೆಯಲಿರುವ ಎಲ್ಲ ಹಳ್ಳಿಗಳೂ ಈವರೆಗೆ ಬ್ಯಾಂಕ್ ಸೌಲಭ್ಯ ಪಡೆಯದಿರುವ ಊರುಗಳಾಗಿದ್ದು, ಈ ಡಿಸೆಂಬರ್ ಅಂತ್ಯದೊಳಗೆ ಶಾಖೆಗಳು ಆರಂಭವಾಗುವ ಯೋಜನೆಯಿದೆ. ಮುಂದಿನ ಹಂತದಲ್ಲಿ ಇನ್ನೂ ೧೯ ಶಾಖೆಗಳಿಗೆ ಪರವಾನಗಿ ದೊರೆಯಲಿದೆ. ಬ್ಯಾಂಕಿನ ಪ್ರಥಮ ಶಾಖೆ ಚಿಕ್ಕಮಗಳೂರಲ್ಲಿ ಏಪ್ರಿಲ್ ತಿಂಗಳಿಂದಲೇ ಆರಂಭವಾಗಿದೆ.

### ನಮ್ಮ ಕ್ಷೇತ್ರಕ್ಕೂ ಮೂರು

ಈ ಕಂತಿನಲ್ಲಿ ನಮ್ಮ ಶೃಂಗೇರಿ ವಿಧಾನ ಸಭಾ ಕ್ಷೇತ್ರಕ್ಕೂ ನೆಮ್ಮಾರು (ಶೃಂಗೇರಿ ತಾ॥), ಆಗಳಗಂಡಿ, ಹಾಲ್ಮುತ್ತೂರು (ಕೊಪ್ಪ ತಾ॥) – ಹೀಗೆ ೩ ಶಾಖೆಗಳು ದೊರೆತಿವೆ. **ಆದರೆ, ಇಡೀ ಜಿಲ್ಲೆಯಲ್ಲಿ ನಮ್ಮ ನ.ರಾ.ಪುರ ತಾಲ್ಲೂಕೊಂದನ್ನು ಮಾತ್ರ ಬಂಜೆಯಾಗಿಸಿರುವುದು ದುಃಖದ ಸಂಗತಿ.** ಮುಂದಿನ ಕಂತಿನಲ್ಲಾದರೂ ಈ ತಾಲ್ಲೂಕಿಗೆ 'ಸಂತಾನ ಪ್ರಾಪ್ತಿ' ಯಾಗುತ್ತದೋ, ಕಾದು ನೋಡಬೇಕು.

## ಕೊಪ್ಪದಲ್ಲಿ ಹೆಚ್ಚುತ್ತಿರುವ ಕಳ್ಳರ ಹಾವಳಿ

ಕೊಪ್ಪ: ಇಲ್ಲಿ ಈಚಿನ ಕೆಲವು ದಿನಗಳಲ್ಲಿ ಕಳ್ಳರ ಹಾವಳಿ ಹೆಚ್ಚುತ್ತಿದೆಯೆಂದು ಸುದ್ದಿಗಳು ಬರುತ್ತಿವೆ.

ಕೆಲ ದಿನಗಳ ಹಿಂದೆ ಮೇಲಿನ ಪೇಟೆಯ ಕೆಲವೆಡೆ ಬಟ್ಟೆಗಳ ಕಳ್ಳತನಗಳು ನಡೆದಿರುವುದಾಗಿ ಸುದ್ದಿಯಾಗಿತ್ತು. ಈ ವಾರ ಮುಖ್ಯ ಪೇಟೆಯ ಒಂದು ಅಂಗಡಿಯಲ್ಲಿ ಕಳವಿನ ವಿಫಲ ಯತ್ನ, ಇನ್ನೊಂದು ಅಂಗಡಿಯಲ್ಲಿ ಕಳವು ನಡೆದಿರುವುದಾಗಿ ಹೇಳಲಾಗಿದೆ.

ಕೊಪ್ಪದ ಹೊರವಲಯದಲ್ಲೂ ಕೆಲವೆಡೆ ಕಳ್ಳತನಗಳು ನಡೆದಿರುವುದಾಗಿ ಈಚೆಗೆ ಸುದ್ದಿಯಾಗಿತ್ತು.

## ಇನ್ನೊಂದು ಯಶಸ್ವಿ ಗ್ರಾಮ ಸಂದರ್ಶನ ಸಭೆ

(ವರದಿ: ಹೆಗ್ಗಾರು ಜಯಂತ್)

**ನಿಲುವಾಗಿಲು: ಇಲ್ಲಿ ಸೆ. ೧ರಂದು ನಡೆದ ಜಿಲ್ಲಾಧಿಕಾರಿಗಳ ಗ್ರಾಮ ಸಂದರ್ಶನ ಕಾರ್ಯಕ್ರಮದಲ್ಲಿ ಗ್ರಾಮದ ೩ ಪ್ರಮುಖ ಬೇಡಿಕೆಗಳಿಗೂ ಆಶಾದಾಯಕವಾದ ಖಚಿತ ಭರವಸೆಗಳು ದೊರೆತು ಗ್ರಾಮಸ್ಥರಲ್ಲಿ ತೃಪ್ತಿ ಮೂಡಿಸಿ, ಅತ್ಯಂತ ಯಶಸ್ವಿಯಾಯಿತೆಂದು ಹೇಳಬಹುದು.**

ಬಿಲಗದ್ದೆ, ನಿಲುವಾಗಿಲು ಮತ್ತು ಹೆಗ್ಗಾರು ಗ್ರಾಮಗಳ ಮಟ್ಟದಲ್ಲಿ ಈ ಸಭೆ ನಡೆಯಿತು.

ಅರ್ಧವಾಗಿ ನಿಂತಿರುವ ರಾಷ್ಟ್ರೀಯ ಗ್ರಾಮಾಂತರ ಕುಡಿವ ನೀರು ಪೂರೈಕೆ ಯೋಜನೆಯ ಕೆಲಸವನ್ನು ಅ. ೨ರೊಳಗೆ ಪೂರೈಸಬೇಕೆಂಬ ಗಡುವು; ಕಟ್ಟಡ ಸಿದ್ಧವಾಗಿ ನಿಂತಿರುವ ಪಶುವೈದ್ಯ ಘಟಕದ ಮಂಜೂರಾತಿ ಹಾಗೂ ಗ್ರಾಮೀಣ ಬ್ಯಾಂಕ್ ಶಾಖೆ ಸ್ಥಾಪನೆ ಬಗ್ಗೆ ಜಿಲ್ಲಾಧಿಕಾರಿಗಳು ಮತ್ತು ಶಾಸಕರಿಂದ 'ಸಾಧ್ಯವಾದರೆ ಇದೇ ಸಾಲಿನಲ್ಲಿ ಸೇರಿಸುತ್ತೇವೆ. ಆಗದಿದ್ದರೆ ಮುಂದಿನ ವರ್ಷ ಖಂಡಿತ ಮಾಡಿಸಿಕೊಡುತ್ತೇವೆ'ಂಬ ಭರವಸೆ–ಇವು ಸಭೆಯ ಮುಖ್ಯ ಫಲಿತಾಂಶಗಳು.

(ಜಿಲ್ಲೆಯಲ್ಲಿ ಈ ವರ್ಷ ೨೬ ಗ್ರಾಮೀಣ ಬ್ಯಾಂಕ್ ಶಾಖೆಗಳನ್ನು ತೆರೆಯಲಾಗುವುದು. ಪಶುವೈದ್ಯ ಘಟಕಗಳಿಗಾಗಿ ರಾಜ್ಯದಲ್ಲಿ ಕಟ್ಟಿಸಿರುವ ೨೦೦ ಕಟ್ಟಡಗಳು ವೈದ್ಯರ ಕೊರತೆಯಿಂದ ಖಾಲಿ ಬಿದ್ದಿವೆ. ಸದ್ಯಕ್ಕೆ ಕಾಂಟ್ರಾಕ್ಟ್ ಮೇಲೆ ಕೆಲವು ನಿವೃತ್ತ ವೈದ್ಯರ ಸೇವೆ ಪಡೆದುಕೊಳ್ಳುವ ನಿರೀಕ್ಷೆ ಇದೆ.)

### ಅಗತ್ಯಗಳ ಪಟ್ಟಿ

ಇನ್ನು ೨-೩ ತಿಂಗಳೊಳಗೆ ಈ ಗ್ರಾಮಗಳ ಅಗತ್ಯಗಳ ಅಧಿಕೃತ ಪಟ್ಟಿಯೊಂದನ್ನು ತಯಾರಿಸಿ, ಗ್ರಾಂಟ್ ಬಂದಾಗ ಇದರ ಆಧಾರದ ಮೇಲೆ ಆದ್ಯತೆಯ ಪ್ರಕಾರ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗುವುದು. ಕುಡಿವ ನೀರು ಪೂರೈಕೆಗೆ ಮೊದಲ ಆದ್ಯತೆ ಕೊಡಲಾಗುವುದು.

ಮನೆ ನಿವೇಶನಗಳನ್ನು ನವೆಂಬರ್ ೧ರೊಳಗೆ ಹಂಚಲು ಕಾರ್ಯಕ್ರಮ ಹಾಕಿಕೊಳ್ಳಲಾಗಿದ್ದು, ಅದೇ ರೀತಿ ಯಾವ್ಯಾವ ಕಾಮಗಾರಿ ಎಷ್ಟೆಷ್ಟು ದಿನದಲ್ಲಿ ಪೂರೈಸಲಾಗುವುದೆಂದು ಆಯಾಯ ಇಲಾಖೆಯಲ್ಲಿ ಪ್ರಕಟಿಸಲಾಗುವುದು.

ದರಖಾಸ್ತು ವಿಷಯದಲ್ಲಿ ಗ್ರಾಮ ಪಂಚಾಯ್ತಿಗಳ ಮಟ್ಟದಲ್ಲಿ ತೀರ್ಮಾನ ಕೈಗೊಳ್ಳುವ ಯೋಜನೆಯಿದೆ. ಆದರೆ ಎಲ್ಲಾ ಇಲಾಖೆಗಳಲ್ಲೂ ಸಿಬ್ಬಂದಿ ಕೊರತೆ ಇದ್ದು, ಸಿಬ್ಬಂದಿ ದೊರೆತೊಡನೆ ಈ ಕೆಲಸ ಆರಂಭಿಸಲಾಗುವುದು.

ಪ್ರತಿ ಹೋಬಳಿಯಲ್ಲಿ ಹೋಬಳಿಕಛೇರಿ, ಜನರ ಅರ್ಜಿಗಳಿಗೆ ನಿರ್ದಿಷ್ಟ ಅವಧಿಯೊಳಗೆ ಉತ್ತರ ಹೇಳುವ ಅಥವ ತಿಳಿಸುವ ವ್ಯವಸ್ಥೆ, ಹೋಬಳಿ ಮಟ್ಟಕ್ಕೆ ಎಲ್ಲ ವ್ಯವಹಾರಗಳನ್ನು ಕನ್ನಡದ ಬಳಕೆ, ಕಛೇರಿಗಳಲ್ಲಿ ಸಾರ್ವಜನಿಕರಿಗೆ ಕೂರಲು ವ್ಯವಸ್ಥೆ–ಇವನ್ನು ಘೋಷಿಸಿದ್ದು, ಸಾರ್ವಜನಿಕರು ತಮ್ಮ ಕೆಲಸಗಳ ಬಗ್ಗೆ ನೇರವಾಗಿ ಅಧಿಕಾರಿಗಳನ್ನೇ ಕಾಣಬೇಕೆಂದು ಜಿಲ್ಲಾಧಿಕಾರಿಗಳು ಮನವಿ ಮಾಡಿದರು.

(ನೀನೇ ಪುಟಕ್ಕೆ)

ಮುಂಜಾವು
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್.
ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯
೩ನೇ ವರ್ಷ ೩ನೇ ಸಂಚಿಕೆ ಕೊಪ್ಪ ೯-೯-೧೯೮೪ ಭಾನುವಾರ ಬೆಲೆ ೨೦ ಪೈಸೆ

# ಕೊಪ್ಪದಲ್ಲಿ ಕೋರ್ಟ್ ಇನ್ನಾದರೂ ತೆರೆಯಲಿ

ಸೆಪ್ಟೆಂಬರ್ ೧೦ ರ ಸೋಮವಾರ ಚಿಕ್ಕಮಗಳೂರಿನ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರಾದ ಶ್ರೀ ಎಸ್.ಬಿ.ತಂಬದ್‌ರವರು, ಕೊಪ್ಪದಲ್ಲಿ ಪ್ರಥಮ ದರ್ಜೆ ನ್ಯಾಯಾಲಯದ ಸ್ಥಾಪನೆಗೆ ಉದ್ದೇಶಿಸಿರುವ ಕಟ್ಟಡದ ಪರಿಶೀಲನೆಗಾಗಿ ಬರುವವರಿದ್ದಾರೆ. ಈ ಸಂದರ್ಭದಲ್ಲಿ ಊರಿನ ನಾಗರಿಕರ ಪರವಾಗಿ ಪುರಸಭೆ ಅವರಿಗೆ ಬಿನ್ನವತ್ತಳೆ ಅರ್ಪಿಸಿ ಅತ್ಯಂತ ಶೀಘ್ರವಾಗಿ ಕೋರ್ಟ್ ಸ್ಥಾಪಿಸುವಂತೆ ಮನವಿ ಮಾಡಲಿದೆ. ಅಲ್ಲದೆ ತಾಲ್ಲೂಕಿನ ದೂರ ದೂರದ ಗ್ರಾಮಗಳ ಜನತೆಯ ಪ್ರತಿನಿಧಿಗಳ ಒಂದು ನಿಯೋಗವೂ ನ್ಯಾಯಾಧೀಶರಿಗೆ ಇದೇ ರೀತಿ ಮನವಿ ಅರ್ಪಿಸುವ ಸಂಭವವಿದೆ.

ಅಂತೂ ಕೊಪ್ಪದಲ್ಲೊಂದು ನ್ಯಾಯಾಲಯದ ಸ್ಥಾಪನೆ ಸನ್ನಿಹಿತವಾದಂತೆ ಕಾಣುತ್ತದೆ. ವಾಸ್ತವವಾಗಿ ಈಗ್ಗೆ ಕನಿಷ್ಠ ೧೦ ವರ್ಷಗಳ ಹಿಂದೆಯೇ ಆಗಿರಬೇಕಾಗಿದ್ದ ಕೆಲಸ ಇದು. ಮಂಜೂರಾಗಿ, ಕಟ್ಟಡ ಕಟ್ಟಲ್ಪಟ್ಟು ಎಲ್ಲಾ ಸಿದ್ಧತೆ ಆಗುವಾಗ, ಇಲ್ಲಿ ಕೋರ್ಟ್ ಸ್ಥಾಪಿಸಿದರೆ ನ. ರಾ. ಪುರದ ಹಿತಾಸಕ್ತಿಗೆ ಧಕ್ಕೆಯಾಗುತ್ತದೆಂದು ಅಲ್ಲಿನವರು ಅಡ್ಡಿ ತಂದಿದ್ದರಿಂದ ನ್ಯಾಯಾಲಯ ಈ ತಾಲ್ಲೂಕಿನ ಜನರಿಗೆ ಇನ್ನೂ ಮರೀಚಿಕೆಯಾಗಿಯೇ ಉಳಿದಿದೆ.

ನಾವು ಈ ಹಿಂದೆಯೇ ಬರೆದಿರುವಂತೆ, ತೀರಾ ದುರ್ಗಮವಾದ, ಸಂಚಾರ ಸೌಕರ್ಯಗಳು ತೀರಾ ಅಲಭ್ಯವಾದ ಈ ತಾಲ್ಲೂಕಿನ ದೂರ ದೂರದ ಜನರಿಗೆ ಇಲ್ಲೊಂದು ನ್ಯಾಯಾಲಯದ ಸ್ಥಾಪನೆಯಿಂದ ದೊರೆಯುವ ಪ್ರಯೋಜನ ಎಷ್ಟೆಂಬುದು ಅಳತೆಗೆ ಮೀರಿದ್ದು. ಹಾಗಾಗಿಯೇ, ಪಕ್ಷಗಳ ಭೇದವಿಲ್ಲದೆ ಇಡೀ ತಾಲ್ಲೂಕಿನ ಎಲ್ಲ ಮುಖಂಡರೂ ಜನರೂ ಒಂದಾಗಿ ಈ ಬೇಡಿಕೆಗಾಗಿ —ಸೌಮ್ಯವಾಗಿಯೇ ಆದರೂ ಸತತವಾಗಿ— ಹೋರಾಡುತ್ತಿದ್ದಾರೆ.

ಅಲ್ಲದೆ, ಶೃಂಗೇರಿಯಲ್ಲಿ ಕಟ್ಟಡದ ಸೌಕರ್ಯವಿಲ್ಲದ್ದರಿಂದ ಅಲ್ಲಿ ಸದ್ಯಕ್ಕೆ ನ್ಯಾಯಾಲಯ ಸ್ಥಾಪನೆ ಆಗುವ ನಿರೀಕ್ಷೆ ಇಲ್ಲವೆನ್ನಲಾಗಿದ್ದು, ಆ ತಾ॥ನ ಜನ ಕೂಡ ಕೊಪ್ಪದಲ್ಲಿ ನ್ಯಾಯಾಲಯ ಸ್ಥಾಪನೆಗೆ ಬೆಂಬಲವಾಗಿದ್ದಾರೆಂದು ಹೇಳಲಾಗಿದೆ. ಹೀಗಿರುವಾಗ, ಎರಡು ತಾ॥ಗಳಿಗೆ ಪ್ರಯೋಜನವಾಗುವ ಈ ಕೆಲಸಕ್ಕೆ ಯಾರು ಯಾವ ಕಾರಣಕ್ಕೇ ಅಡ್ಡ ಬಂದರೂ ಅದು ಅಸಮರ್ಥನೀಯ.

ವಾಸ್ತವವಾಗಿ, ಈ ಅಡ್ಡಿಗೆ ಪ್ರಮುಖ ಕಾರಣಕರ್ತರಾಗಿದ್ದ ನ.ರಾ.ಪುರದ ವಕೀಲರುಗಳಲ್ಲೂ ಪುನರಾಲೋಚನೆ, ಮನಃಪರಿವರ್ತನೆ ನಡೆದಿದೆಯೆಂದು ಹೇಳಲಾಗಿದೆ. ನೆರೆಯ ಇನ್ನೊಂದು ತಾಲ್ಲೂಕಿನಲ್ಲಿ ಕೋರ್ಟ್ ಆಗುವುದು ಬೇಡ ಎನ್ನಲು ನಮಗೇನು ಹಕ್ಕಿದೆ? ಎಂದು ಅವರಲ್ಲೇ ಕೆಲವರು ಯೋಚಿಸತೊಡಗಿದ್ದಾರೆನ್ನಲಾಗಿದೆ. ಇಂಥ ಆತ್ಮವಿಮರ್ಶೆ ಬಹಳ ಉಪಯುಕ್ತ ಮತ್ತು ಅಭಿನಂದನೀಯ.

ಅಚ್ಚುಕಟ್ಟಾದ ಕಟ್ಟಡ ಸಿದ್ಧವಾಗಿದೆ; ನ್ಯಾಯಾಧೀಶರ ವಸತಿಗೂ ವ್ಯವಸ್ಥೆ ಆಗಿದೆ. ಜನ ನ್ಯಾಯಾಲಯದ ಪ್ರಯೋಜನ ಸಿಕ್ಕೀತೆಂದು ವರ್ಷಗಟ್ಟಲೆಯಿಂದ ಕಾಯುತ್ತಿದ್ದಾರೆ. ಸರ್ಕಾರದ ಕಡೆಯಿಂದಲೂ ಯಾವ ತಡೆಯೂ ಇಲ್ಲ. ಶ್ರೀ ತಂಬದ್‌ರವರೂ ಕೂಡ ಇಲ್ಲಿನ ಜನರ ಸಂಕಷ್ಟವನ್ನ ಅರ್ಥ ಮಾಡಿಕೊಂಡಿರುವ ಸಹೃದಯರೆಂದು ಕೇಳಿದ್ದೇವೆ. ಹೀಗಿರುವಾಗ ಇನ್ನಾದರೂ ನ್ಯಾಯಾಲಯದ ಸ್ಥಾಪನೆ ಶೀಘ್ರವಾಗಿ ಆಗಬೇಕು. "ನ್ಯಾಯದಾನ ವಿಳಂಬ ಮಾಡಿದರೆ ನ್ಯಾಯವನ್ನೇ ನಿರಾಕರಿಸಿದಂತೆ" ಎಂಬುದು ನ್ಯಾಯಕ್ಕೆ ಸಂಬಂಧಿಸಿದ ಮಾತು. ಅದನ್ನೇ **ನ್ಯಾಯಾಲಯಕ್ಕೂ** ಅನ್ವಯಿಸುವಂತಾಗಬಾರದು.

—ಸಂಪಾದಕ.

## ಕೊಪ್ಪ ತಾ॥ ನಲ್ಲಿ ಖಾಯಂ ಸಹಾಯಕ ವಿದ್ಯಾಧಿಕಾರಿಗಳಿಲ್ಲವೆ ಶಿಕ್ಷಕರಿಗೆ ೬ ತಿಂಗಳಿಗೊಮ್ಮೆ 'ಉಪವಾಸ'

**ಕೊಪ್ಪ: ಈ ತಾಲ್ಲೂಕಿನಲ್ಲಿ ಖಾಯಂ ಸಹಾಯಕ ವಿದ್ಯಾಧಿಕಾರಿಗಳಿಲ್ಲದ್ದರಿಂದಾಗಿ ತಾಲ್ಲೂಕಿನ ಶಿಕ್ಷಕರಿಗೆ ಪ್ರತಿ ೬ ತಿಂಗಳಿಗೊಮ್ಮೆ ಉಪವಾಸ ಬೀಳುವ ಸ್ಥಿತಿ ಈಗ್ಗೆ ೨-೩ ವರ್ಷದಿಂದಲೂ ನಡೆದುಕೊಂಡು ಬಂದಿದೆ.**

ಖಾಯಂ ಅಲ್ಲದ ಸಹಾಯಕ ವಿದ್ಯಾಧಿಕಾರಿಗಳು ಶಿಕ್ಷಕರ ಸಂಬಳದ ಹಣವನ್ನು ಬಟವಾಡೆ ಮಾಡುವ ಪರವಾನಗಿ ಪ್ರತಿ ೬ ತಿಂಗಳಿಗೊಮ್ಮೆ ಸರ್ಕಾರದಿಂದ ಮಂಜೂರಾಗಿ ಬರಬೇಕು. ಈ ಹಂತದಲ್ಲಿ ವಿಪರೀತ ವಿಳಂಬವಾಗುವುದರಿಂದ ಕೆಲವೊಮ್ಮೆ ೩ ತಿಂಗಳ ಕಾಲ ಸಂಬಳ ಇಲ್ಲವಾಗುವ ಪರಿಸ್ಥಿತಿ ಉದ್ಭವಿಸುತ್ತಿದೆಯೆನ್ನಲಾಗಿದೆ.

ಈ ಪರಿಸ್ಥಿತಿಯನ್ನು ನಿವಾರಿಸುವಂತೆ ಶಿಕ್ಷಕರುಗಳು ಬೇಕಾದಷ್ಟು ಮನವಿ ಮಾಡಿದ್ದರೂ ಅವರ ಸಹಾಯಕ್ಕೆ ಬರುವವರಿಲ್ಲವಾಗಿದ್ದು, ಇನ್ನು ೧೫ ದಿನದೊಳಗೆ ಸಂಬಳ ಬಟವಾಡೆಯಾಗದಿದ್ದಲ್ಲಿ ಮುಷ್ಕರ ಹೂಡುವುದಾಗಿ ಸರ್ಕಾರದ ಮುಖ್ಯ ಕಾರ್ಯದರ್ಶಿ ಹಾಗೂ ತಾ॥ ಮ್ಯಾಜಿಸ್ಟ್ರೇಟರಿಗೆ ಶಿಕ್ಷಕರ ಸಂಘ ಸಲ್ಲಿಸಿರುವ ಮನವಿಯಲ್ಲಿ ತಿಳಿಸಿದೆ.

## ಜಿಲ್ಲಾ ಗ್ರಾಮೀಣ ಬ್ಯಾಂಕಿನಿಂದ ಜಿಲ್ಲೆಯಲ್ಲಿ ಈ ವರ್ಷ ೧೦ ಶಾಖೆಗಳು

ಚಿಕ್ಕಮಗಳೂರು: ಈ ವರ್ಷ ಹೊಸದಾಗಿ ಆರಂಭವಾಗಿರುವ ಚಿಕ್ಕಮಗಳೂರು-ಕೊಡಗು ಗ್ರಾಮೀಣ ಬ್ಯಾಂಕ್ ತನ್ನ ಶಾಖೆಗಳ ಜಾಲದ ಮೊದಲ ಹಂತವಾಗಿ ಈ ವರ್ಷ ಜಿಲ್ಲೆಯಲ್ಲಿ ೧೦ ಮತ್ತು ಕೊಡಗು ಜಿಲ್ಲೆಯಲ್ಲಿ ೧೧ ಶಾಖೆಗಳನ್ನು ತೆರೆಯಲಿದೆ.

ಇದರ ಪ್ರಯೋಜನ ಪಡೆಯಲಿರುವ ಎಲ್ಲ ಹಳ್ಳಿಗಳೂ ಈವರೆಗೆ ಬ್ಯಾಂಕ್ ಸೌಲಭ್ಯ ಪಡೆಯದಿರುವ ಊರುಗಳಾಗಿದ್ದು, ಈ ಡಿಸೆಂಬರ್ ಅಂತ್ಯದೊಳಗೆ ಶಾಖೆಗಳು ಆರಂಭವಾಗುವ ಯೋಜನೆಯಿದೆ. ಮುಂದಿನ ಹಂತದಲ್ಲಿ ಇನ್ನೂ ೧೯ ಶಾಖೆಗಳಿಗೆ ಪರವಾನಗಿ ದೊರೆಯಲಿದೆ. ಬ್ಯಾಂಕಿನ ಪ್ರಥಮ ಶಾಖೆ ಚಿಕ್ಕಮಗಳೂರಲ್ಲಿ ಏಪ್ರಿಲ್ ತಿಂಗಳಿಂದಲೇ ಆರಂಭವಾಗಿದೆ.

### ನಮ್ಮ ಕ್ಷೇತ್ರಕ್ಕೂ ಮೂರು

ಈ ಕಂತಿನಲ್ಲಿ ನಮ್ಮ ಶೃಂಗೇರಿ ವಿಧಾನ ಸಭಾ ಕ್ಷೇತ್ರಕ್ಕೂ ನೆಮ್ಮಾರು (ಶೃಂಗೇರಿ ತಾ॥), ಅಗಳಗಂಡಿ. ಹಾಲ್ಮುತ್ತೂರು (ಕೊಪ್ಪ ತಾ॥) – ಹೀಗೆ ೩ ಶಾಖೆಗಳು ದೊರೆತಿವೆ. **ಆದರೆ, ಇಡೀ ಜಿಲ್ಲೆಯಲ್ಲಿ ನಮ್ಮ ನ.ರಾ.ಪುರ ತಾಲ್ಲೂಕೊಂದನ್ನು ಮಾತ್ರ ಬಂಜೆಯಾಗಿಸಿರುವುದು ದುಃಖದ ಸಂಗತಿ.** ಮುಂದಿನ ಕಂತಿನಲ್ಲಾದರೂ ಈ ತಾಲ್ಲೂಕಿಗೆ 'ಸಂತಾನ ಪ್ರಾಪ್ತಿ'ಯಾಗುತ್ತದೋ, ಕಾದು ನೋಡಬೇಕು.

## ಕೊಪ್ಪದಲ್ಲಿ ಹೆಚ್ಚುತ್ತಿರುವ ಕಳ್ಳರ ಹಾವಳಿ

ಕೊಪ್ಪ: ಇಲ್ಲಿ ಈಚಿನ ಕೆಲವು ದಿನಗಳಲ್ಲಿ ಕಳ್ಳರ ಹಾವಳಿ ಹೆಚ್ಚುತ್ತಿದೆಯೆಂದು ಸುದ್ದಿಗಳು ಬರುತ್ತಿವೆ.

ಕೆಲ ದಿನಗಳ ಹಿಂದೆ ಮೇಲಿನ ಪೇಟೆಯ ಕೆಲವೆಡೆ ಬಟ್ಟೆಗಳ ಕಳ್ಳತನಗಳು ನಡೆದಿರುವುದಾಗಿ ಸುದ್ದಿಯಾಗಿತ್ತು. ಈ ವಾರ ಮುಖ್ಯ ಪೇಟೆಯ ಒಂದು ಅಂಗಡಿಯಲ್ಲಿ ಕಳವಿನ ವಿಫಲ ಯತ್ನ, ಇನ್ನೊಂದು ಅಂಗಡಿಯಲ್ಲಿ ಕಳವು ನಡೆದಿರುವುದಾಗಿ ಹೇಳಲಾಗಿದೆ.

ಕೊಪ್ಪದ ಹೊರವಲಯದಲ್ಲೂ ಕೆಲವೆಡೆ ಕಳ್ಳತನಗಳು ನಡೆದಿರುವುದಾಗಿ ಈಚೆಗೆ ಸುದ್ದಿಯಾಗಿತ್ತು.

## ಇನ್ನೊಂದು ಯಶಸ್ವಿ ಗ್ರಾಮ ಸಂದರ್ಶನ ಸಭೆ

(ವರದಿ: ಹೆಗ್ಗಾರು ಜಯೇಂಶ್)

**ನಿಲುವಾಗಿಲು: ಇಲ್ಲಿ ಸೆ. ೧ರಂದು ನಡೆದ ಜಿಲ್ಲಾಧಿಕಾರಿಗಳ ಗ್ರಾಮ ಸಂದರ್ಶನ ಕಾರ್ಯಕ್ರಮದಲ್ಲಿ ಗ್ರಾಮದ ೩ ಪ್ರಮುಖ ಬೇಡಿಕೆಗಳಿಗೂ ಆಶಾದಾಯಕವಾದ ಖಚಿತ ಭರವಸೆಗಳು ದೊರೆತು ಗ್ರಾಮಸ್ಥರಲ್ಲಿ ತೃಪ್ತಿ ಮೂಡಿಸಿ, ಅತ್ಯಂತ ಯಶಸ್ವಿಯಾಯಿತೆಂದು ಹೇಳಬಹುದು.**

ಬಿಲಗದ್ದೆ, ನಿಲುವಾಗಿಲು ಮತ್ತು ಹೆಗ್ಗಾರು ಗ್ರಾಮಗಳ ಮಟ್ಟದಲ್ಲಿ ಈ ಸಭೆ ನಡೆಯಿತು.

ಅರ್ಧವಾಗಿ ನಿಂತಿರುವ ರಾಷ್ಟ್ರೀಯ ಗ್ರಾಮಾಂತರ ಕುಡಿವ ನೀರು ಪೂರೈಕೆ ಯೋಜನೆಯ ಕೆಲಸವನ್ನು ಅ. ೨ರೊಳಗೆ ಪೂರೈಸಬೇಕೆಂಬ ಗಡುವು; ಕಟ್ಟಡ ಸಿದ್ಧವಾಗಿ ನಿಂತಿರುವ ಪಶುವೈದ್ಯ ಘಟಕದ ಮಂಜೂರಾತಿ ಹಾಗೂ ಗ್ರಾಮೀಣ ಬ್ಯಾಂಕ್ ಶಾಖೆ ಸ್ಥಾಪನೆ ಬಗ್ಗೆ ಜಿಲ್ಲಾಧಿಕಾರಿಗಳು ಮತ್ತು ಶಾಸಕರಿಂದ 'ಸಾಧ್ಯವಾದರೆ ಇದೇ ಸಾಲಿನಲ್ಲಿ ಸೇರಿಸುತ್ತೇವೆ. ಆಗದಿದ್ದರೆ ಮುಂದಿನ ವರ್ಷ ಖಂಡಿತ ಮಾಡಿಸಿಕೊಡುತ್ತೇವೆ'ಂಬ ಭರವಸೆ—ಇವು ಸಭೆಯ ಮುಖ್ಯ ಫಲಿತಾಂಶಗಳು.

(ಜಿಲ್ಲೆಯಲ್ಲಿ ಈ ವರ್ಷ ೨೩ ಗ್ರಾಮೀಣ ಬ್ಯಾಂಕ್ ಶಾಖೆಗಳನ್ನು ತೆರೆಯಲಾಗುವುದು. ಪಶುವೈದ್ಯ ಘಟಕಗಳಿಗಾಗಿ ರಾಜ್ಯದಲ್ಲಿ ಕಟ್ಟಿಸಿರುವ ೨೦೦ ಕಟ್ಟಡಗಳು ವೈದ್ಯರ ಕೊರತೆಯಿಂದ ಖಾಲಿ ಬಿದ್ದಿವೆ. ಸದ್ಯಕ್ಕೆ ಕಾಂಟ್ರಾಕ್ಟ್ ಮೇಲೆ ಕೆಲವು ನಿವೃತ್ತ ವೈದ್ಯರ ಸೇವೆ ಪಡೆದುಕೊಳ್ಳುವ ನಿರೀಕ್ಷೆ ಇದೆ.)

### ಅಗತ್ಯಗಳ ಪಟ್ಟಿ

ಇನ್ನು ೨-೩ ತಿಂಗಳೊಳಗೆ ಈ ಗ್ರಾಮಗಳ ಅಗತ್ಯಗಳ ಅಧಿಕೃತ ಪಟ್ಟಿಯೊಂದನ್ನು ತಯಾರಿಸಿ, ಗ್ರಾಂಟ್ ಬಂದಾಗ ಇದರ ಆಧಾರದ ಮೇಲೆ ಆದ್ಯತೆಯ ಪ್ರಕಾರ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗುವುದು. ಕುಡಿವ ನೀರು ಪೂರೈಕೆಗೆ ಮೊದಲ ಆದ್ಯತೆ ಕೊಡಲಾಗುವುದು.

ಮನೆ ನಿವೇಶನಗಳನ್ನು ನವೆಂಬರ್ ೧ರೊಳಗೆ ಹಂಚಲು ಕಾರ್ಯಕ್ರಮ ಹಾಕಿಕೊಳ್ಳಲಾಗಿದ್ದು, ಅದೇ ರೀತಿ ಯಾವ್ಯಾವ ಕಾಮಗಾರಿ ಎಷ್ಟೆಷ್ಟು ದಿನದಲ್ಲಿ ಪೂರೈಸಲಾಗುವುದೆಂದು ಆಯಾಯ ಇಲಾಖೆಯಲ್ಲಿ ಪ್ರಕಟಿಸಲಾಗುವುದು.

ದರಖಾಸ್ತು ವಿಷಯದಲ್ಲಿ ಗ್ರಾಮ ಪಂಚಾಯ್ತಿಗಳ ಮಟ್ಟದಲ್ಲಿ ತೀರ್ಮಾನ ಕೈಗೊಳ್ಳುವ ಯೋಜನೆಯಿದೆ. ಆದರೆ ಎಲ್ಲಾ ಇಲಾಖೆಗಳಲ್ಲೂ ಸಿಬ್ಬಂದಿ ಕೊರತೆ ಇದ್ದು, ಸಿಬ್ಬಂದಿ ದೊರೆತೊಡನೆ ಈ ಕೆಲಸ ಆರಂಭಿಸಲಾಗುವುದು.

ಪ್ರತಿ ಹೋಬಳಿಯಲ್ಲಿ ಹೋಬಳಿ ಸಭೆಯಿದ್ದು, ಜನರ ಅರ್ಜಿಗಳಿಗೆ ನಿರ್ದಿಷ್ಟ ಅವಧಿಯೊಳಗೆ ಉತ್ತರ ಹೇಳುವ ಅಥವಾ ತಿಳಿಸುವ ವ್ಯವಸ್ಥೆ, ಹೆಚ್ಚಿನ ಮಟ್ಟಿಗೆ ಎಲ್ಲ ವ್ಯವಹಾರಗಳಲ್ಲಿ ಕನ್ನಡದ ಬಳಕೆ, ಕಚೇರಿಗಳಲ್ಲಿ ಸಾರ್ವಜನಿಕರಿಗೆ ಕೂರಲು ವ್ಯವಸ್ಥೆ—ಇವನ್ನು ಉದ್ದೇಶಿಸಿದ್ದು, ಸಾರ್ವಜನಿಕರು ತಮ್ಮ ಕೆಲಸಗಳ ಬಗ್ಗೆ ನೇರವಾಗಿ ಅಧಿಕಾರಿಗಳನ್ನೇ ಕಾಣಬೇಕೆಂದು ಜಿಲ್ಲಾಧಿಕಾರಿಗಳು ಮನವಿ ಮಾಡಿದರು.

(೩ನೇ ಪುಟಕ್ಕೆ)

# ಇನ್ನೊಂದು ಯಶಸ್ವೀ ಗ್ರಾಮ ಸಂದರ್ಶನ ಸಭೆ

(ಮೊದಲ ಪುಟದಿಂದ)

ಸುಮಾರು ೧೨೦ ಕ್ಕೂ ಹೆಚ್ಚು ಅರ್ಜಿಗಳು ಬಂದಿದ್ದು, ಅವುಗಳಿಗೆ ೧೫ ದಿನದೊಳಗೆ ಸೂಕ್ತ ಉತ್ತರ ಕಳಿಸುವ ಭರವಸೆ ಇತ್ತರು.

ನೀರಿನ ಕೆರಿಗೆಯ ಬಗ್ಗೆ ರೈತರು ಪ್ರತ್ಯೇಕ ಪ್ರತ್ಯೇಕವಾಗಿ ಎ.ಸಿ.ಯವರಿಗೆ ಅರ್ಜಿ ಸಲ್ಲಿಸಬೇಕು; ಸ್ಥಳ ಪರಿಶೀಲನೆಯ ನಂತರ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂದರು.

### ಕೆಲವು ಆಶ್ವಾಸನೆಗಳು

ಕಾಳನಾಯಕನ ಕಟ್ಟೆ ಮತ್ತು ಹೆಗ್ಗಾರು ಬೋರ್ಡುಕಲ್ಲು ಜಾಗಗಳಲ್ಲಿ ಸದ್ಯವೇ ಬೀದಿ ವಿದ್ಯುದ್ದೀಪ ಹಾಕಲಾಗುವುದು. ನೀರಾವರಿ ಪಂಪ್ ಸೆಟ್‌ಗಳಿಗೆ ಆದ್ಯತೆ ನೀಡಿ. ಸರ್ವೆ ಆಗಿರುವ ಜಾಗಗಳಿಗೆ ಈ ವರ್ಷ ಸಂಪರ್ಕ ಕೊಡಲಾಗುವುದು. ೧೫೫ ಮನೆಗಳಿಗೆ 'ಭಾಗ್ಯಜ್ಯೋತಿ'ಯಲ್ಲಿ ವಿದ್ಯುದ್ದೀಪ ಒದಗಿಸಲಾಗುವುದು.

ಜಿಲ್ಲಾಧಿಕಾರಿಗಳ ಆದೇಶದಂತೆ ನಿಲುವಾಗಿಲು-ಬಿಕ್ಕಳಿ-ಕಾವಡಿ ರಸ್ತೆಯನ್ನು ಲೋಕೋಪಯೋಗಿ ಇಲಾಖೆಗೆ ಸೇರಿಸಲಾಗುವುದು. ಕಾವಡಿ–ಶಾನುವಳ್ಳಿ ರಸ್ತೆಯಲ್ಲಿ ಕಾವಡಿಯಿಂದ ೪ ಕಿ.ಮೀ. ಟಾರು ಆಗಿದ್ದು ಈ ವರ್ಷ ಶಾನುವಳ್ಳಿ ಕಡೆಯಿಂದ ಆರಂಭಿಸಿ ವರ್ಷಕ್ಕೆ ೨ ಕಿ.ಮೀ.ನಂತೆ ಟಾರು ಹಾಕಿ ಪೂರೈಸಲಾಗುವುದು.

ನಿಲುವಾಗಿಲು-ಕಲ್ಮನೆ ರಸ್ತೆಯಲ್ಲಿ ಬಾಗಿಹಳ್ಳಕ್ಕೆ ಸೇತುವೆಗಾಗಿ ೪ ಲಕ್ಷಗಳ ರೂ.ಗಳ ಎಸ್ಟಿಮೇಟ್ ಆಗಿದ್ದು, ಇನ್ನು ೨-೩ ವರ್ಷಗಳಲ್ಲಿ ಅದನ್ನು ಸೇರಿಸಿಕೊಳ್ಳಲಾಗುವುದು.

ಕೃಷಿ ಇಲಾಖೆಯಿಂದ ಈ ವರ್ಷ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಮನೆ ಬಾಗಿಲಿಗೆ ಹಣ್ಣಿನ ಮತ್ತು ಉರುವಲಿನ ಗಿಡಗಳನ್ನು ತಲುಪಿಸುವ ಯೋಜನೆಯಿದ್ದು, ಅದರಲ್ಲಿ ಯಾವುದೇ ರೀತಿ **ವಿಭಾಗ ಮಾಡದೆ** ಪ್ರಯೋಜನದಾರರಿಗೆ ಅನುಕೂಲ ಮಾಡಿ ಕೊಡಲು ಸ್ಥಳೀಯ ಮುಖಂಡರು ಸಹಕರಿಸಬೇಕೆಂದು ಜಿಲ್ಲಾಧಿಕಾರಿಗಳು ಕೋರಿದರು.

### 'ಕೊಕ್ಕೆ'ಯಿಲ್ಲದೆ ಸಹಕಾರಿ ಸಾಲ—

ಸ್ಥಳೀಯ ಸಹಕಾರ ಸಂಘದಿಂದ ೪೨ ಜನರಿಗೆ ಸ್ವಲ್ಪ ತಡವಾದರೂ ಹಬ್ಬದ ಹೊತ್ತಿಗೆ ಮಂಜೂರಾಗಿ ಬಂದ ಸಾಲ ಕಾಕತಾಳೀಯವೆಂಬಂತೆ ಈ ಸಭೆಗೆ ೨ ದಿನ ಮೊದಲು ಬಟವಾಡೆಯಾಗಿರುವುದು ಈ ಸಭೆಯ ಪ್ರಭಾವವನ್ನು ತೋರಿಸುತ್ತದೆ. ಹೊಸತಾಗಿ ಸಾಲ ಕೇಳಿರುವವರಿಗೂ ಇನ್ನೊಂದು ವಾರದಲ್ಲಿ ಸಿಗುವ ಭರವಸೆ ಸಿಕ್ಕಿದ್ದಲ್ಲದೆ, ಈ ಹಿಂದೆ ಹೇಳುತ್ತಿದ್ದಂತೆ, ಹಳೇ ಸಾಲದ **ವಸೂಲಾತಿಯ ಯಾವ ಆಧಾರವನ್ನೂ ಇಟ್ಟುಕೊಳ್ಳದೆ** ಹೆಚ್ಚಿನ ಅನುಕೂಲವಾಗಿದೆ. (ಈ ಪ್ರದೇಶಕ್ಕೆ ಮಾತ್ರ) (ಬಹಶಃ ಇದರಲ್ಲಿ ನಮ್ಮ ಪತ್ರಿಕೆಯ ಪಾತ್ರವೂ ಸ್ವಲ್ಪ ಉಂಟೆಂಬ ಹೆಮ್ಮೆ ನಮ್ಮದು.)

### ಪ್ರಶಾಂತ ವಾತಾವರಣದಲ್ಲಿ

ಜಿಲ್ಲೆಯಲ್ಲಿ ೨೦ನೆಯ ಹಾಗೂ ಕ್ಷೇತ್ರದಲ್ಲಿ ೬ನೆಯದಾದ ಈ ಸಭೆ ಪ್ರಶಾಂತ ವಾತಾವರಣದಲ್ಲಿ ನಡೆಯಿತು. ಅಧ್ಯಕ್ಷತೆಯನ್ನು ಶಾಸಕ ಗೋವಿಂದ ಗೌಡರು ವಹಿಸಿದ್ದು, ಜಿಲ್ಲಾಧಿಕಾರಿಗಳು, ಉಪ ವಿಭಾಗಾಧಿಕಾರಿ ಗೋವಿಂದಪ್ಪ ಹಾಗೂ ಜಿಲ್ಲೆ ಮತ್ತು ತಾ|| ನ ವಿವಿಧ ಇಲಾಖೆಗಳ ಮುಖ್ಯಸ್ಥರು ಭಾಗವಹಿಸಿದ್ದರು. ತಹಸೀಲ್ದಾರ್ ಎಸ್.ಕರಿಗೌಡ ಸ್ವಾಗತ ಕೋರಿದರು.

ಸಭೆಯಲ್ಲಿ ಕೊಟ್ಟ ಆಶ್ವಾಸನೆಗಳು ಕಾರ್ಯರೂಪಕ್ಕೆ ಬರುವುದನ್ನು ಗಮನಿಸಲಾಗುವುದು: ಹಿಂದಿನ ಸಭೆಗಳ ತೀರ್ಮಾನಗಳಲ್ಲಿ ಶೇ. ೯೦ ಭಾಗ ಜಾರಿಯಾಗಿವೆ ಎಂದು ಜಿಲ್ಲಾಧಿಕಾರಿಗಳು ಹೇಳಿದರು.

ಈ ಪ್ರದೇಶ ಎಚ್ಚೆತ್ತ ರೈತರ, ರೈತ ಸಂಘಟನೆಯ ಚಟುವಟಿಕೆಯ ಕ್ಷೇತ್ರವಾಗಿದ್ದು ಇಲ್ಲಿನ ಗ್ರಾಮ ಸಭೆಯ ಬಗ್ಗೆ ಸ್ಥಳೀಯ ಅಧಿಕಾರವರ್ಗದವರಿಗೆ ಸಾಕಷ್ಟು ಪಿಟಿಪಿಟಿ ಇತ್ತೆನ್ನಿಸುತ್ತದೆ.

ಶಾಸಕರ ಮತ್ತು ಹಿರಿಯ ಅಧಿಕಾರಿಗಳ ಸರಳತನವನ್ನು ಜನ ಸೂಕ್ಷ್ಮವಾಗಿ ಪರೀಕ್ಷಿಸುತ್ತಿದ್ದಾರೆ. ಈ ಜಿಲ್ಲಾಧಿಕಾರಿಗಳ ಆಡಳಿತದಲ್ಲಿ ಭರವಸೆಗಳ ಸುಳ್ಳು ಸರಮಾಲೆ ಸ್ವಲ್ಪ ಕಡಿಮೆಯಾಗಿದೆ. ಸಾಧ್ಯವಾಗುವವುಗಳನ್ನು ಇಂತಿಷ್ಟು ಸಮಯದೊಳಗೆ ಮಾಡುತ್ತೇವೆನ್ನುವ, ಇಲ್ಲವಾದರೆ 'ಇಲ್ಲ' ಎನ್ನುವ ಸ್ಪಷ್ಟ ಧೋರಣೆ ಕಾಣುತ್ತದೆ.

## ವಯಸ್ಕರ ಶಿಕ್ಷಣದ ಶಿಕ್ಷಕರ ತರಬೇತಿ ಶಿಬಿರ

ಕೊಪ್ಪ: ಈ ತಾ||ನ ವಯಸ್ಕರ ಶಿಕ್ಷಣ ಕೇಂದ್ರಗಳ ಶಿಕ್ಷಕರ ತರಬೇತಿ ಶಿಬಿರವನ್ನು ಸೆ. ೫ ರಂದು ಕೊಪ್ಪ ಲಯನ್ಸ್ ಕ್ಲಬ್ ಅಧ್ಯಕ್ಷ ಮೋಹನ್ ಬಿ.ಎಸ್. ಶೆಟ್ಟಿ ಉದ್ಘಾಟಿಸಿದರು. ಲಯನ್ಸ್ ಕಾರ್ಯದರ್ಶಿ ಗೋಪಾಲಕೃಷ್ಣ ಶೆಟ್ಟಿ ಮತ್ತು ಬೊಮ್ಲಾಪುರ ಪಂಚಾಯ್ತಿ ಮಾಜಿ ಅಧ್ಯಕ್ಷ ಮಂಜಯ್ಯ ಶೆಟ್ಟಿ ಮುಖ್ಯ ಅತಿಥಿಗಳಾಗಿದ್ದರು. ಈ ವರ್ಷದ ಅತ್ಯುತ್ತಮ ವಯಸ್ಕರ ಶಿಕ್ಷಣ ಕೇಂದ್ರದ ಶಿಕ್ಷಕರಿಗೆ ಲಯನ್ಸ್‌ಕ್ಲಬ್‌ನಿಂದ ೧೦೦ ರೂ. ಬಹುಮಾನ ಕೊಡುವುದಾಗಿ ಡಾ|| ಶೆಟ್ಟಿ ತಿಳಿಸಿದರು.

ಯೋಜನಾಧಿಕಾರಿ ಎಂ.ಹಲಗಪ್ಪ ಯೋಜನೆಯ ಪರಿಚಯ ಮಾಡಿದರು. ಬಿ. ಜಿ. ಮಹಾಬಲ ಸ್ವಾಗತಿಸಿ, ವಂದಿಸಿದರು.

## ನಿವೃತ್ತ ಪೋಸ್ಟ್ ಮಾಸ್ಟರಿಗೆ ಬೀಳ್ಕೊಡುಗೆ

ಕೊಪ್ಪ: ಜಯಪುರದಲ್ಲಿ ಪೋಸ್ಟ್ ಮಾಸ್ಟರಾಗಿದ್ದು, ಈಚೆಗೆ ಸ್ವಇಚ್ಛೆಯ ನಿವೃತ್ತಿ ಪಡೆದ ಜಿ.ಪರಮೇಶ್ವರ ಭಟ್ಟರಿಗೆ ಇಲ್ಲಿನ ಅಂಚೆ ಕಚೇರಿಯ ಸಿಬ್ಬಂದಿ ಆ. ೩೧ರಂದು ಬೀಳ್ಕೊಡುಗೆ ಸಮಾರಂಭ ಏರ್ಪಡಿಸಿದ್ದರು. ಬಿ.ಸಿ.ನಾಯಕ್ ಅಧ್ಯಕ್ಷತೆ ವಹಿಸಿದ್ದರು. ಕೆ.ರಾಮಚಂದ್ರ ಸ್ವಾಗತಿಸಿ, ಜೆ.ಎಂ.ಭಟ್ ವಂದಿಸಿದರು.

೧೯೬೨ರಲ್ಲಿ ನೌಕರಿಗೆ ಸೇರಿದ ಪರಮೇಶ್ವರ ಭಟ್ ನೌಕರರ ಸಂಘದ ಚಟುವಟಿಕೆಗಳಲ್ಲಿ ಬಹಳ ಸಕ್ರಿಯವಾಗಿದ್ದರು. ೩ ವರ್ಷದಿಂದ ಸಂಘದ ಕೊಪ್ಪ ಶಾಖೆಯ ಅಧ್ಯಕ್ಷರಾಗಿದ್ದರು.

## ಅಗಳಗಂಡಿಗೆ ಬಂಪರ್!

ಅಗಳಗಂಡಿ: ಇಲ್ಲಿನ ಸುತ್ತಲ ಜನ ಒಂದು ಸರ್ಕಾರಿ ಪ್ರೌಢಶಾಲೆಗಾಗಿ ವರ್ಷಗಟ್ಟಲೆ ಹೋರಾಡಿದವರು. (೧೯೮೩-೮೪ ರಲ್ಲಿ ಖಂಡಿತ ಕೊಡಿಸುವುದಾಗಿ ಬೇಗಾನೆ ಖಚಿತ ಭರವಸೆ ಕೊಟ್ಟಿದ್ದರು. ಪುನಃ ಅವರ ಸರ್ಕಾರವೇ ಬಂದಿದ್ದರೆ ಬಹುಶಃ ಕೊಡಿಸಿಯೂ ಕೊಡಿಸುತ್ತಿದ್ದರೇನೋ.) ಈ ವರ್ಷ ಜನ ಹೋರಾಟದ ದಣಿವಾರಿಸಿಕೊಳ್ಳುತ್ತ, ಶಾಲೆ ಬಂದ ಬಗ್ಗೆ ಸಂಭ್ರಮ ಆಚರಿಸುತ್ತ, ಅದರ ಲಾಲನೆ–ಪಾಲನೆಗೆ ಪರದಾಡುತ್ತ ಇರುವಷ್ಟರಲ್ಲಿ ಗ್ರಾಮೀಣಬ್ಯಾಂಕಿನ ಒಂದು ಶಾಖೆಯೂ–ಅವರು ಅದರ ಕನಸು ಕೂಡ ಕಾಣುವ ಮೊದಲೇ–ಬರಲಿದೆಯೆಂಬ ಸುದ್ದಿ ಅವರ ಪಾಲಿಗೆ ಬಂಪರ್ ಹೊಡೆದಂತೆ ಬಂದಿದೆ!

## ಶೃಂಗೇರಿ ಬಾಲಿಕಾಪ್ರೌಢಶಾಲೆ ವಿದ್ಯಾರ್ಥಿನೀ ಸಂಘ ಆರಂಭ

ಶೃಂಗೇರಿ: ಇಲ್ಲಿನ ಬಾಲಿಕಾ ಪ್ರೌಢಶಾಲೆಯ ವಿದ್ಯಾರ್ಥಿನೀ ಸಂಘದ ಉದ್ಘಾಟನೆ ಆ. ೨೪ ರಂದು ಹೊಸನಗರ ವಲಯ ಅರಣ್ಯಾಧಿಕಾರಿ ಸೂರ್ಯಾಚಾರ್ ಅಧ್ಯಕ್ಷತೆಯಲ್ಲಿ ನಡೆಯಿತು.

ಶಾಲೆಯ ಹಳೆಯ ವಿದ್ಯಾರ್ಥಿನಿಯರಾದ ಬಿ.ಎಸ್.ಶೈಲಾ ಜ್ಯೋತಿ ಬೆಳಗಿಸಿ, ಬಿ.ಜಿ. ಅನಿತಾ ಸಂಘದ ಕಾರ್ಯಕರ್ತರಿಗೆ ಪ್ರಮಾಣ ವಚನ ಬೋಧಿಸಿದರು. 'ಭಾರತ ಸಂಸ್ಕೃತಿ ಪರಿಚಯ' ಪರೀಕ್ಷೆಯಲ್ಲಿ ಜಿಲ್ಲೆಗೆ ಮೊದಲ ಸ್ಥಾನ ಗಳಿಸಿದ ಪದ್ಮಾವತಿಗೆ ರಜತ ಪದಕ ನೀಡಲಾಯಿತು. ಶಾಲಾ ಮುಖ್ಯೋಪಾಧ್ಯಾಯರು ವಿದ್ಯಾರ್ಥಿನಿಯರಿಗೆಲ್ಲ ಶುಭ ಹಾರೈಸಿದರು. ಎಲ್.ಸುಗುಣ ಸ್ವಾಗತಿಸಿ ಎಸ್. ಕೆ. ಉಮಾ ವಂದಿಸಿದರು.

## ಐತಿಹಾಸಿಕ! ಮೊಟ್ಟಮೊದಲ ಬಾರಿಗೆ ಒಬ್ಬ ಆಯುರ್ವೇದ ವೈದ್ಯರು ಮಂತ್ರಿಯಾದರು!

ಬೆಂಗಳೂರು: ದೇಶಕ್ಕೆ ಸ್ವಾತಂತ್ರ್ಯ ಬಂದು ೩೭ ವರ್ಷಗಳ ನಂತರ ದೇಶದಲ್ಲಿ ಮೊಟ್ಟಮೊದಲ ಬಾರಿಗೆ, ಈ ದೇಶದಲ್ಲಿ ಹುಟ್ಟಿ ಬೆಳೆದ (ಈಗ ಅಳಿಯುತ್ತಿರುವ!) ವೈದ್ಯ ಪದ್ಧತಿಯಾದ ಆಯುರ್ವೇದದ ವೈದ್ಯರೊಬ್ಬರು ಮಂತ್ರಿ ಪದವಿ ಅಲಂಕರಿಸುತ್ತಿದ್ದಾರೆ. ಈ ಸಾಧನೆಯ ಹೆಮ್ಮೆ ಕರ್ನಾಟಕದ್ದೆಂಬುದು ನಮಗೊಂದು ಕೋಡು !

ಮೊನ್ನೆ ಪುನರ್ರಚಿತವಾದ ರಾಜ್ಯ ಸಂಪುಟದಲ್ಲಿ ಆರೋಗ್ಯ ಇಲಾಖೆ ರಾಜ್ಯ ಮಂತ್ರಿಯಾಗಿ ಸೇರ್ಪಡೆಯಾಗಿರುವ ಡಾ|| ಸಂಗಮೇಶ್ವರ ಸರ್ದಾರ್ ಒಬ್ಬ ಯಶಸ್ವೀ ಆಯುರ್ವೇದ ವೈದ್ಯರು, ಜೊತೆಗೆ ಸಾರ್ವಜನಿಕ ಕ್ಷೇತ್ರದಲ್ಲೂ ಒಳ್ಳೆಯ ಹೆಸರು ಗಳಿಸಿದವರು.

## 'ಗೆಳೆಯರ ಬಳಗ' ಆರಂಭ

(ವರದಿ: ಹುಮನಾ)

ಕಟ್ಟಿನಮನೆ: ಇಲ್ಲಿನ 'ಗೆಳೆಯರ ಬಳಗ' ಒಕ್ಕೂಟವನ್ನು ಶಾಸಕ ಗೋವಿಂದಗೌಡರು ಈಚೆಗೆ ಉದ್ಘಾಟಿಸಿದರು. ಪಂಚಾಯ್ತಿಯ ಮಾಜಿ ಅಧ್ಯಕ್ಷ ಕೆ.ಎಂ.ಸೀತಾರಾಮ ಭಟ್ ಅಧ್ಯಕ್ಷತೆ ವಹಿಸಿದ್ದರು. ಬಳಗದ ಅಧ್ಯಕ್ಷರಾಗಿ ನಟರಾಜ್, ಕೆ. ಎಸ್. ಶಿವಶಂಕರ್ ಕಾರ್ಯದರ್ಶಿಯಾಗಿ, ಗುರುಮೂರ್ತಿ ಖಜಾಂಚಿಯಾಗಿ ಮತ್ತು ಹತ್ತು ಮಂದಿ ಕಾರ್ಯಕಾರಿ ಸಮಿತಿಗೆ ಆಯ್ಕೆಯಾದರು.

ಬಳಗದ ಆಶ್ರಯದಲ್ಲಿ ೪ ದಿನ ವೈಭವದ ಗಣೇಶೋತ್ಸವ ನಡೆದು ಸೆ. ೧ ರಂದು ಡೊಳ್ಳು ಕುಣಿತದ ಮೆರವಣಿಗೆಯೊಂದಿಗೆ ಜಲಪಾತದ ಕೆರೆಯಲ್ಲಿ ಗಣಪತಿ ವಿಸರ್ಜನೆ ನಡೆಯಿತು.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: **ಸಿರಿಮನೆ ನಾಗರಾಜ್,** ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ. ಶೃಂಗೇರಿ ಪ್ರತಿನಿಧಿ: **ಕಲ್ಕುಳಿ ವಿಠಲ ಹೆಗ್ಡೆ**

# ಇನ್ನೊಂದು ಯಶಸ್ವೀ ಗ್ರಾಮ ಸಂದರ್ಶನ ಸಭೆ

(ಮೊದಲ ಪುಟದಿಂದ)

ಸುಮಾರು ೧೨೦ ಕ್ಕೂ ಹೆಚ್ಚು ಅರ್ಜಿಗಳು ಬಂದಿದ್ದು, ಅವುಗಳಿಗೆ ೧೫ ದಿನದೊಳಗೆ ಸೂಕ್ತ ಉತ್ತರ ಕಳಿಸುವ ಭರವಸೆ ಇತ್ತರು.

ನೀರಿನ ತೆರಿಗೆಯ ಬಗ್ಗೆ ರೈತರು ಪ್ರತ್ಯೇಕ ಪ್ರತ್ಯೇಕವಾಗಿ ಎ.ಸಿ.ಯವರಿಗೆ ಅರ್ಜಿ ಸಲ್ಲಿಸಬೇಕು; ಸ್ಥಳ ಪರಿಶೀಲನೆಯ ನಂತರ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂದರು.

### ಕೆಲವು ಆಶ್ವಾಸನೆಗಳು

ಕಾಳನಾಯಕನ ಕಟ್ಟೆ ಮತ್ತು ಹೆಗ್ಗಾರು ಬೋಡ್ರ್ಕಲ್ಲು ಜಾಗಗಳಲ್ಲಿ ಸದ್ಯವೇ ಬೀದಿ ವಿದ್ಯುದ್ದೀಪ ಹಾಕಲಾಗುವುದು. ನೀರಾವರಿ ಪಂಪ್ ಸೆಟ್‌ಗಳಿಗೆ ಆದ್ಯತೆ ನೀಡಿ, ಸರ್ವೆ ಆಗಿರುವ ಜಾಗಗಳಿಗೆ ಈ ವರ್ಷ ಸಂಪರ್ಕ ಕೊಡಲಾಗುವುದು. ೧೫ ಮನೆಗಳಿಗೆ 'ಭಾಗ್ಯಜ್ಯೋತಿ'ಯಲ್ಲಿ ವಿದ್ಯುದ್ದೀಪ ಒದಗಿಸಲಾಗುವುದು.

ಜಿಲ್ಲಾಧಿಕಾರಿಗಳ ಆದೇಶದಂತೆ ನಿಲುವಾಗಿಲು-ಬಿಕ್ಕಳಿ-ಕಾವಡಿ ರಸ್ತೆಯನ್ನು ಲೋಕೋಪಯೋಗಿ ಇಲಾಖೆಗೆ ಸೇರಿಸಲಾಗುವುದು. ಕಾವಡಿ–ಶಾನುವಳ್ಳಿ ರಸ್ತೆಯಲ್ಲಿ ಕಾವಡಿಯಿಂದ ೪ ಕಿ.ಮೀ. ಟಾರು ಆಗಿದ್ದು ಈ ವರ್ಷ ಶಾನುವಳ್ಳಿ ಕಡೆಯಿಂದ ಆರಂಭಿಸಿ ವರ್ಷಕ್ಕೆ ೨ ಕಿ.ಮೀ.ನಂತೆ ಟಾರು ಹಾಕಿ ಪೂರೈಸಲಾಗುವುದು.

ನಿಲುವಾಗಿಲು-ಕಲ್ಮನೆ ರಸ್ತೆಯಲ್ಲಿ ಬಾಗಿ ಹಳ್ಳಕ್ಕೆ ಸೇತುವೆಗಾಗಿ ೪ ಲಕ್ಷಗಳ ರೂ.ಗಳ ಎಸ್ಟಿಮೇಟ್ ಆಗಿದ್ದು, ಇನ್ನು ೨–೩ ವರ್ಷಗಳಲ್ಲಿ ಅದನ್ನು ಸೇರಿಸಿಕೊಳ್ಳಲಾಗುವುದು.

ಕೃಷಿ ಇಲಾಖೆಯಿಂದ ಈ ವರ್ಷ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಮನೆ ಬಾಗಿಲಿಗೆ ಹಣ್ಣಿನ ಮತ್ತು ಉರುವಲಿನ ಗಿಡಗಳನ್ನು ತಲುಪಿಸುವ ಯೋಜನೆಯಿದ್ದು, ಅದರಲ್ಲಿ ಯಾವುದೇ ರೀತಿ **ವಿಭಾಗ ಮಾಡದೆ** ಪ್ರಯೋಜನದಾರರಿಗೆ ಅನುಕೂಲ ಮಾಡಿ ಕೊಡಲು ಸ್ಥಳೀಯ ಮುಖಂಡರು ಸಹಕರಿಸಬೇಕೆಂದು ಜಿಲ್ಲಾಧಿಕಾರಿಗಳು ಕೋರಿದರು.

### 'ಕೊಕ್ಕೆ'ಯಿಲ್ಲದೆ ಸಹಕಾರಿ ಸಾಲ—

ಸ್ಥಳೀಯ ಸಹಕಾರ ಸಂಘದಿಂದ ೪೨ ಜನರಿಗೆ ಸ್ವಲ್ಪ ತಡವಾದರೂ ಹಬ್ಬದ ಹೊತ್ತಿಗೆ ಮಂಜೂರಾಗಿ ಬಂದ ಸಾಲ ಕಾಕತಾಳೀಯವೆಂಬಂತೆ ಈ ಸಭೆಗೆ ೨ ದಿನ ಮೊದಲು ಬಟವಾಡೆಯಾಗಿರುವುದು ಈ ಸಭೆಯ ಪ್ರಭಾವವನ್ನು ತೋರಿಸುತ್ತದೆ. ಹೊಸತಾಗಿ ಸಾಲ ಕೇಳಿರುವವರಿಗೂ ಇನ್ನೊಂದು ವಾರದಲ್ಲಿ ಸಿಗುವ ಭರವಸೆ ಸಿಕ್ಕಿದ್ದಲ್ಲದೆ, ಈ ಹಿಂದೆ ಹೇಳುತ್ತಿದ್ದಂತೆ, ಹಳೇ ಸಾಲದ **ವಸೂಲಾತಿಯು ಯಾವ ಆಧಾರವನ್ನೂ ಇಟ್ಟುಕೊಳ್ಳದೆ** ಹೆಚ್ಚಿನ ಅನುಕೂಲವಾಗಿದೆ. (ಈ ಪ್ರದೇಶಕ್ಕೆ ಮಾತ್ರ) (ಬಹುಶಃ ಇದರಲ್ಲಿ ನಮ್ಮ ಪತ್ರಿಕೆಯ ಪಾತ್ರವೂ ಸ್ವಲ್ಪ ಉಂಟೆಂಬ ಹೆಮ್ಮೆ ನಮ್ಮದು.)

### ಪ್ರಶಾಂತ ವಾತಾವರಣದಲ್ಲಿ

ಜಿಲ್ಲೆಯಲ್ಲಿ ೨೦ನೆಯ ಹಾಗೂ ಕ್ಷೇತ್ರದಲ್ಲಿ ೬ನೆಯದಾದ ಈ ಸಭೆ ಪ್ರಶಾಂತ ವಾತಾವರಣದಲ್ಲಿ ನಡೆಯಿತು. ಅಧ್ಯಕ್ಷತೆಯನ್ನು ಶಾಸಕ ಗೋವಿಂದ ಗೌಡರು ವಹಿಸಿದ್ದು, ಜಿಲ್ಲಾಧಿಕಾರಿಗಳು, ಉಪ ವಿಭಾಗಾಧಿಕಾರಿ ಗೋವಿಂದಪ್ಪ ಹಾಗೂ ಜಿಲ್ಲೆ ಮತ್ತು ತಾ॥ನ ವಿವಿಧ ಇಲಾಖೆಗಳ ಮುಖ್ಯಸ್ಥರು ಭಾಗವಹಿಸಿದ್ದರು. ತಹಸೀಲ್ದಾರ್ ಎಸ್.ಕರಿಗೌಡ ಸ್ವಾಗತ ಕೋರಿದರು.

ಸಭೆಯಲ್ಲಿ ಕೊಟ್ಟ ಆಶ್ವಾಸನೆಗಳು ಕಾರ್ಯರೂಪಕ್ಕೆ ಬರುವುದನ್ನು ಗಮನಿಸಲಾಗುವುದು: ಹಿಂದಿನ ಸಭೆಗಳ ತೀರ್ಮಾನಗಳಲ್ಲಿ ಶೇ. ೬೦ ಭಾಗ ಜಾರಿಯಾಗಿವೆ ಎಂದು ಜಿಲ್ಲಾಧಿಕಾರಿಗಳು ಹೇಳಿದರು.

ಈ ಪ್ರದೇಶ ಎಚ್ಚೆತ್ತ ರೈತರ, ರೈತ ಸಂಘಟನೆಯ ಚಟುವಟಿಕೆಯ ಕ್ಷೇತ್ರವಾಗಿದ್ದು ಇಲ್ಲಿನ ಗ್ರಾಮ ಸಭೆಯ ಬಗ್ಗೆ ಸ್ಥಳೀಯ ಅಧಿಕಾರವರ್ಗದವರಿಗೆ ಸಾಕಷ್ಟು ಪಿಟಪಿಟ ಇತ್ತೆನ್ನಿಸುತ್ತದೆ.

ಶಾಸಕರ ಮತ್ತು ಹಿರಿಯ ಅಧಿಕಾರಿಗಳ ಸರಳತನವನ್ನು ಜನ ಸೂಕ್ಷ್ಮವಾಗಿ ಪರೀಕ್ಷಿಸುತ್ತಿದ್ದಾರೆ. ಈ ಜಿಲ್ಲಾಧಿಕಾರಿಗಳ ಆಡಳಿತದಲ್ಲಿ ಭರವಸೆಗಳ ಸುಳ್ಳು ಸರಮಾಲೆ ಸ್ವಲ್ಪ ಕಡಿಮೆಯಾಗಿದೆ. ಸಾಧ್ಯವಾಗುವವುಗಳನ್ನು ಇಂತಿಷ್ಟು ಸಮಯದೊಳಗೆ ಮಾಡುತ್ತೇವೆನ್ನುವ, ಇಲ್ಲವಾದರೆ 'ಇಲ್ಲ' ಎನ್ನುವ ಸ್ಪಷ್ಟ ಧೋರಣೆ ಕಾಣುತ್ತದೆ.

## ವಯಸ್ಕರ ಶಿಕ್ಷಣದ ಶಿಕ್ಷಕರ ತರಬೇತಿ ಶಿಬಿರ

ಕೊಪ್ಪ: ಈ ತಾ॥ನ ವಯಸ್ಕರ ಶಿಕ್ಷಣ ಕೇಂದ್ರಗಳ ಶಿಕ್ಷಕರ ತರಬೇತಿ ಶಿಬಿರವನ್ನು ಸೆ. ೫ ರಂದು ಕೊಪ್ಪ ಲಯನ್ಸ್ ಕ್ಲಬ್ ಅಧ್ಯಕ್ಷ ಮೋಹನ್ ಬಿ.ಎಸ್. ಶೆಟ್ಟಿ ಉದ್ಘಾಟಿಸಿದರು. ಲಯನ್ಸ್ ಕಾರ್ಯದರ್ಶಿ ಗೋಪಾಲಕೃಷ್ಣ ಶೆಟ್ಟಿ ಮತ್ತು ಬೊಮ್ಲಾಪುರ ಪಂಚಾಯ್ತಿ ಮಾಜಿ ಅಧ್ಯಕ್ಷ ಮಂಜಯ್ಯ ಶೆಟ್ಟಿ ಮುಖ್ಯ ಅತಿಥಿಗಳಾಗಿದ್ದರು. ಈ ವರ್ಷದ ಅತ್ಯುತ್ತಮ ವಯಸ್ಕರ ಶಿಕ್ಷಣ ಕೇಂದ್ರದ ಶಿಕ್ಷಕರಿಗೆ ಲಯನ್ಸ್‌ಕ್ಲಬ್‌ನಿಂದ ೧೦೦ ರೂ. ಬಹುಮಾನ ಕೊಡುವುದಾಗಿ ಡಾ॥ ಶೆಟ್ಟಿ ತಿಳಿಸಿದರು.

ಯೋಜನಾಧಿಕಾರಿ ಎಂ.ಹಲಗಪ್ಪ ಯೋಜನೆಯ ಪರಿಚಯ ಮಾಡಿದರು. ಬಿ. ಜಿ. ಮಹಾಬಲ ಸ್ವಾಗತಿಸಿ, ವಂದಿಸಿದರು.

## ನಿವೃತ್ತ ಪೋಸ್ಟ್ ಮಾಸ್ಟರಿಗೆ ಬೀಳ್ಕೊಡುಗೆ

ಕೊಪ್ಪ: ಜಯಪುರದಲ್ಲಿ ಪೋಸ್ಟ್ ಮಾಸ್ಟರಾಗಿದ್ದು, ಈಚೆಗೆ ಸ್ವಇಚ್ಛೆಯ ನಿವೃತ್ತಿ ಪಡೆದ ಜಿ.ಪರಮೇಶ್ವರ ಭಟ್ಟರಿಗೆ ಇಲ್ಲಿನ ಅಂಚೆ ಕಚೇರಿಯ ಸಿಬ್ಬಂದಿ ಆ. ೩೧ರಂದು ಬೀಳ್ಕೊಡುಗೆ ಸಮಾರಂಭ ಏರ್ಪಡಿಸಿದ್ದರು. ಬಿ.ಸಿ.ನಾಯಕ್ ಅಧ್ಯಕ್ಷತೆ ವಹಿಸಿದ್ದರು. ಕೆ.ರಾಮಚಂದ್ರ ಸ್ವಾಗತಿಸಿ, ಜೆ.ಎಂ.ಭಟ್ ವಂದಿಸಿದರು.

೧೯೬೨ರಲ್ಲಿ ನೌಕರಿಗೆ ಸೇರಿದ ಪರಮೇಶ್ವರ ಭಟ್ ನೌಕರರ ಸಂಘದ ಚಟುವಟಿಕೆಗಳಲ್ಲಿ ಬಹಳ ಸಕ್ರಿಯವಾಗಿದ್ದರು. ೩ ವರ್ಷದಿಂದ ಸಂಘದ ಕೊಪ್ಪ ಶಾಖೆಯ ಅಧ್ಯಕ್ಷರಾಗಿದ್ದರು.

## ಅಗಳಗಂಡಿಗೆ ಬಂಪರ್!

ಅಗಳಗಂಡಿ: ಇಲ್ಲಿನ ಸುತ್ತಲ ಜನ ಒಂದು ಸರ್ಕಾರಿ ಪ್ರೌಢಶಾಲೆಗಾಗಿ ವರ್ಷಗಟ್ಟಲೆ ಹೋರಾಡಿದವರು. (೧೯೮೩–೮೪ರಲ್ಲಿ ಖಂಡಿತ ಕೊಡಿಸುವುದಾಗಿ ಬೇಗಾನೆ ಖಚಿತ ಭರವಸೆ ಕೊಟ್ಟಿದ್ದರು. ಪುನಃ ಅವರ ಸರ್ಕಾರವೇ ಬಂದಿದ್ದರೆ ಬಹುಶಃ ಕೊಡಿಸಿಯೂ ಕೊಡಿಸುತ್ತಿದ್ದರೇನೋ.) ಈ ವರ್ಷ ಜನ ಹೋರಾಟದ ದಣಿವಾರಿಸಿಕೊಳ್ಳುತ್ತ, ಶಾಲೆ ಬಂದ ಬಗ್ಗೆ ಸಂಭ್ರಮ ಆಚರಿಸುತ್ತ, ಅದರ ಲಾಲನೆ–ಪಾಲನೆಗೆ ಪರದಾಡುತ್ತ ಇರುವಷ್ಟರಲ್ಲಿ ಗ್ರಾಮೀಣಬ್ಯಾಂಕಿನ ಒಂದು ಶಾಖೆಯೂ–ಅವರು ಅದರ ಕನಸು ಕೂಡ ಕಾಣುವ ಮೊದಲೇ–ಬರಲಿದೆಯೆಂಬ ಸುದ್ದಿ ಅವರ ಪಾಲಿಗೆ ಬಂಪರ್ ಹೊಡೆದಂತೆ ಬಂದಿದೆ!

## ಶೃಂಗೇರಿ ಬಾಲಿಕಾಪ್ರೌಢಶಾಲೆ ವಿದ್ಯಾರ್ಥಿನೀ ಸಂಘ ಆರಂಭ

ಶೃಂಗೇರಿ: ಇಲ್ಲಿನ ಬಾಲಿಕಾ ಪ್ರೌಢಶಾಲೆಯ ವಿದ್ಯಾರ್ಥಿನೀ ಸಂಘದ ಉದ್ಘಾಟನೆ ಆ. ೨೪ ರಂದು ಹೊಸನಗರ ವಲಯ ಅರಣ್ಯಾಧಿಕಾರಿ ಸೂರ್ಯಾಚಾರ್ ಅಧ್ಯಕ್ಷತೆಯಲ್ಲಿ ನಡೆಯಿತು.

ಶಾಲೆಯ ಹಳೆಯ ವಿದ್ಯಾರ್ಥಿನಿಯರಾದ ಬಿ.ಎನ್.ಶೈಲಾ ಜ್ಯೋತಿ ಬೆಳಗಿಸಿ, ಬಿ.ಜಿ. ಅನಿತಾ ಸಂಘದ ಕಾರ್ಯಕರ್ತರಿಗೆ ಪ್ರಮಾಣ ವಚನ ಬೋಧಿಸಿದರು. 'ಭಾರತ ಸಂಸ್ಕೃತಿ ಪರಿಚಯ' ಪರೀಕ್ಷೆಯಲ್ಲಿ ಜಿಲ್ಲೆಗೆ ಮೊದಲ ಸ್ಥಾನ ಗಳಿಸಿದ ಪದ್ಮಾವತಿಗೆ ರಜತ ಪದಕ ನೀಡಲಾಯಿತು. ಶಾಲಾ ಮುಖ್ಯೋಪಾಧ್ಯಾಯರು ವಿದ್ಯಾರ್ಥಿನಿಯರಿಗೆಲ್ಲ ಶುಭ ಹಾರೈಸಿದರು. ಎ.ಸುಗುಣ ಸ್ವಾಗತಿಸಿ ಎಸ್. ಕೆ. ಉಮಾ ವಂದಿಸಿದರು.

## ಐತಿಹಾಸಿಕ! ಮೊಟ್ಟಮೊದಲ ಬಾರಿಗೆ ಒಬ್ಬ ಆಯುರ್ವೇದ ವೈದ್ಯರು ಮಂತ್ರಿಯಾದರು!

ಬೆಂಗಳೂರು: ದೇಶಕ್ಕೆ ಸ್ವಾತಂತ್ರ್ಯ ಬಂದು ೩೭ ವರ್ಷಗಳ ನಂತರ ದೇಶದಲ್ಲೆ ಮೊಟ್ಟಮೊದಲ ಬಾರಿಗೆ, ಈ ದೇಶದಲ್ಲಿ ಹುಟ್ಟಿ ಬೆಳೆದ (ಈಗ ಅಳಿಯುತ್ತಿರುವ!) ವೈದ್ಯ ಪದ್ಧತಿಯಾದ ಆಯುರ್ವೇದದ ವೈದ್ಯರೊಬ್ಬರು ಮಂತ್ರಿ ಪದವಿ ಅಲಂಕರಿಸುತ್ತಿದ್ದಾರೆ. ಈ ಸಾಧನೆಯ ಹೆಮ್ಮೆ ಕರ್ನಾಟಕದ್ದೆಂಬುದು ನಮಗೊಂದು ಕೋಡು!

ಮೊನ್ನೆ ಪುನರ್ರಚಿತವಾದ ರಾಜ್ಯ ಸಂಪುಟದಲ್ಲಿ ಆರೋಗ್ಯ ಇಲಾಖೆ ರಾಜ್ಯ ಮಂತ್ರಿಯಾಗಿ ಸೇರ್ಪಡೆಯಾಗಿರುವ ಡಾ॥ ಸಂಗಮೇಶ್ವರ ಸರ್ದಾರ್ ಒಬ್ಬ ಯಶಸ್ವೀ ಆಯುರ್ವೇದ ವೈದ್ಯರು, ಜೊತೆಗೆ ಸಾರ್ವಜನಿಕ ಕ್ಷೇತ್ರದಲ್ಲೂ ಒಳ್ಳೆಯ ಹೆಸರು ಗಳಿಸಿದವರು.

## 'ಗೆಳೆಯರ ಬಳಗ' ಆರಂಭ

(ವರದಿ: ಹುಮನಾ)

ಕಟ್ಟಿನಮನೆ: ಇಲ್ಲಿನ 'ಗೆಳೆಯರ ಬಳಗ' ಒಕ್ಕೂಟವನ್ನು ಶಾಸಕ ಗೋವಿಂದಗೌಡರು ಈಚೆಗೆ ಉದ್ಘಾಟಿಸಿದರು. ಪಂಚಾಯ್ತಿಯ ಮಾಜಿ ಅಧ್ಯಕ್ಷ ಕೆ.ಎಂ.ಸೀತಾರಾಮ ಭಟ್ ಅಧ್ಯಕ್ಷತೆ ವಹಿಸಿದ್ದರು. ಬಳಗದ ಅಧ್ಯಕ್ಷರಾಗಿ ನಟರಾಜ್, ಕೆ. ಎಸ್. ಶಿವಶಂಕರ್ ಕಾರ್ಯದರ್ಶಿಯಾಗಿ, ಗುರುಮೂರ್ತಿ ಖಜಾಂಚಿಯಾಗಿ ಮತ್ತು ಹತ್ತು ಮಂದಿ ಕಾರ್ಯಕಾರಿ ಸಮಿತಿಗೆ ಆಯ್ಕೆಯಾದರು.

ಬಳಗದ ಆಶ್ರಯದಲ್ಲಿ ೪ ದಿನ ವೈಭವದ ಗಣೇಶೋತ್ಸವ ನಡೆದು ಸೆ. ೧ ರಂದು ಡೊಳ್ಳು ಕುಣಿತದ ಮೆರವಣಿಗೆಯೊಂದಿಗೆ ಜಲಪಾತದ ಕೆರೆಯಲ್ಲಿ ಗಣಪತಿ ವಿಸರ್ಜನೆ ನಡೆಯಿತು.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: **ಸಿರಿಮನೆ ನಾಗರಾಜ್**, ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ. ಶೃಂಗೇರಿ ಪ್ರತಿನಿಧಿ: **ಕಲ್ಕುಳಿ ವಿಠಲ ಹೆಗ್ಡೆ**